# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2275
ಸದಸ್ಯರ ಹೆಸರು : ಶ್ರೀ ಪ್ರಕಾಶ್ ಕೆ.ರಾಥೋಡ್ (ನಾಮನಿರ್ದೇಶನ ಹೊಂದಿದವರು)
ಉತ್ತರಿಸಬೇಕಾದ ದಿನಾಂಕ: : 26.03.2021
ಉತ್ತರಿಸುವ ಮಾನ್ಯ ಸಚಿವರು : ಕೃಷಿ ಸಚಿವರು

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಕೃಷಿ ಸಿಂಚನಾ ಯೋಜನೆಯಡಿಯಲ್ಲಿ ರೂಪಿಸಿರುವ ಕಾರ್ಯಕ್ರಮಗಳಾವುವು; | ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆಯಡಿ ಕೃಷಿ ಇಲಾಖೆಯ ವತಿಯಿಂದ ಸೂಕ್ಷ್ಮ ನೀರಾವರಿ ಪದ್ಧತಿಗಳಾದ ತುಂತುರು ಮತ್ತು ಹನಿ ನೀರಾವರಿ ಘಟಕಗಳಿಗೆ ಸಹಾಯಧನ ಒದಗಿಸಲಾಗುತ್ತಿದೆ. ಹಾಗೂ ಜಲಾನಯನ ಅಭಿವೃದ್ಧಿ ಇಲಾಖೆಯಿಂದ ಈ ಕೆಳಕಂಡ ಕಾರ್ಯಕ್ರಮಗಳನ್ನು ಅನುಷ್ಠಾನ ಮಾಡಲಾಗುತ್ತಿದೆ.<br>**1) ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ-ಜಲಾನಯನ ಅಭಿವೃದ್ಧಿ ಘಟಕ: (Pradhan Mantri Krishi Sinchayee Yojana-Watershed Development Components):**<br>ಮಣ್ಣು ಮತ್ತು ನೀರು ಸಂರಕ್ಷಣೆಗಾಗಿ ಕಂದಕ ಬದುಗಳು, ಬೋಲ್ಡರ್/ರಬಲ್/ಸಸ್ಯತಡೆಗಳು, ಕೃಷಿ ಹೊಂಡಗಳು, ಚಿಕ್ಕ ತಡೆ ಅಣೆಗಳು, ನಾಲಾಬದುಗಳು, ಖುಷ್ಕಿ ತೋಟಗಾರಿಕೆ, ಕೃಷಿ ಅರಣ್ಯ ಮತ್ತು ಮೇವು ಅಭಿವೃದ್ಧಿ ಮುಂತಾದ ಚಟುವಟಿಕೆಗಳನ್ನು ತಾಂತ್ರಿಕತೆ ಆಧರಿಸಿ ಅನುಷ್ಠಾನ ಮಾಡಲಾಗುತ್ತಿದೆ. ಈ ಚಟುವಟಿಕೆಗಳಿಂದ ಮಣ್ಣು ಮತ್ತು ನೀರಿನ ಸಂರಕ್ಷಣೆಯಾಗಿ ಬೆಳೆಗಳ ಉತ್ಪಾದಕತೆಯು ಹೆಚ್ಚಾಗುತ್ತದೆ.<br>ಯೋಜನಾ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳಲ್ಲಿ ಭೂ ರಹಿತ ಮತ್ತು ಆರ್ಥಿಕವಾಗಿ ಹಿಂದುಳಿದ ಕುಟುಂಬಗಳ ಮಹಿಳೆಯರಿಗಾಗಿ ಸ್ವಸಹಾಯ ಗುಂಪುಗಳನ್ನು ರಚಿಸಲಾಗಿರುತ್ತದೆ. ಸ್ವಸಹಾಯ ಗುಂಪಿನ ಸದಸ್ಯರಿಗೆ ಅಗತ್ಯ ತರಬೇತಿಗಳನ್ನು ನೀಡಿ ಆದಾಯ ಉತ್ಪನ್ನ ಚಟುವಟಿಕೆಗಳನ್ನು ಕೈಗೊಳ್ಳಲು ಸುತ್ತು ನಿಧಿಯನ್ನು ನೀಡಿ ಪ್ರೋತ್ಸಾಹ ನೀಡಲಾಗುತ್ತಿದೆ.<br>**2) ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ-ಇತರೆ ಉಪಚಾರಗಳು, (Pradhan Mantri Krishi Sinchayee Yojana- Other Interventions ):**<br>ಸಮುದಾಯ ನೀರು ಸಂಗ್ರಹಣಾ ವಿನ್ಯಾಸಗಳಾದ ತಡೆಅಣೆ, ನಾಲಾಬದು, ಕಿಂಡಿ ಅಣೆ, ಜಿನುಗುಕೆರೆ ಮತ್ತಿತರ ನೀರು ಸಂಗ್ರಹಣಾ ವಿನ್ಯಾಸಗಳನ್ನು ರಚಿಸಿ, ಸದರಿ ವಿನ್ಯಾಸಗಳನ್ನು ಸೂಕ್ಷ್ಮ ನೀರಾವರಿಗೆ ಅಳವಡಿಸುವುದರ ಮೂಲಕ ಬೆಳೆಗಳ ಸಂದಿಗ್ಧ ಪರಿಸ್ಥಿತಿಯಲ್ಲಿ ರಕ್ಷಣಾತ್ಮಕ ನೀರಾವರಿಗೆ ನೀರನ್ನು ಬಳಸಿ ಕೃಷಿ ಉತ್ಪಾದನೆಯನ್ನು ಹೆಚ್ಚಿಸಲು ನೆರವು ನೀಡಲಾಗುತ್ತಿದೆ. |

| | | |
|---|---|---|
| (ಆ) | ಕಳೆದ ಮೂರು ವರ್ಷಗಳಿಂದ ವಿಜಯಪುರ ಜಿಲ್ಲೆಯಲ್ಲಿ ಸದರಿ ಯೋಜನೆಯ ಉಪಯೋಗ ಪಡೆದ ಫಲಾನುಭವಿಗಳ ಸಂಖ್ಯೆ ಎಷ್ಟು? (ವಿವರಗಳನ್ನು ಒದಗಿಸುವುದು) | ಕಳೆದ ಮೂರು ವರ್ಷಗಳಿಂದ, ಸದರಿ ಯೋಜನೆಯಡಿ ವಿಜಯಪುರ ಜಿಲ್ಲೆಯಲ್ಲಿ ಉಪಯೋಗ ಪಡೆದಿರುವ ಫಲಾನುಭವಿಗಳ ವಿವರ ಈ ಕೆಳಕಂಡಂತಿದೆ. |

| ಕ್ರ ಸಂ | ವರ್ಷ | ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ. ಸೂಕ್ಷ್ಮ ನೀರಾವರಿ ಯೋಜನೆಯ ತುಂತುರು/ಹನಿ ನೀರಾವರಿಯಡಿ ಪ್ರಯೋಜನ ಪಡೆದ ಫಲಾನುಭವಿಗಳ ಸಂಖ್ಯೆ | ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ- ಜಲಾನಯನ ಅಭಿವೃದ್ಧಿ ಘಟಕದಡಿ ಪ್ರಯೋಜನ ಪಡೆದ ಫಲಾನುಭವಿಗಳ ಸಂಖ್ಯೆ | ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ- ಇತರೆ ಉಪಚಾರಗಳಡಿ ಪ್ರಯೋಜನ ಪಡೆದ ಫಲಾನುಭವಿಗಳ ಸಂಖ್ಯೆ |
|---|---|---|---|---|
| 1 | 2017-18 | 8577 | 874 | 378 |
| 2 | 2018-19 | 11757 | 4753 | 507 |
| 3 | 2019-20 | 11000 | 468 | 195 |
| 4 | 2020-21 | 18434 | 21 | 81 |
| | ಒಟ್ಟು | **49768** | **6116** | **1161** |

**ಸಂಖ್ಯೆ:-ಕೃಇ/63/ಕೃಕೈಉ/2021**

(ಬಿ.ಸಿ.ಪಾಟೀಲ್)
ಕೃಷಿ ಸಚಿವರು